

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಫೆಬ್ರವರಿ ೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬)<br>Bengaluru, Thursday, February 5, 2015 (Magha 16, Shaka Varsha 1936) | ಸಂಚಿಕೆ ೬<br>Issue 6 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಈ ಸಂಸ್ಥೆಯ ಆಡಳಿತ ಮಂಡಳಿಗೆ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆಕುಕ 49 ಪಿಟಿಡಿ 2006, ದಿನಾಂಕ : 16-03-2006 ಹಾಗೂ ತಿದ್ದುಪಡಿ ಸಂಖ್ಯೆ : ಆಕುಕ 74 ಪಿಟಿಡಿ 2009, ದಿನಾಂಕ : 11-09-2009.
2. ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಸ್‌ಜೆಐಸಿಆರ್ : ಸಿಬ್ಬಂದಿ (1) : 138 : 2014-15, ದಿನಾಂಕ : 11-11-2014.

**ಪ್ರಸ್ತಾವನೆ :**

ಓದಲಾದ (1)ರ ಸರ್ಕಾರದ ಆದೇಶಗಳಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಆಡಳಿತ ಮಂಡಳಿಯನ್ನು 3 ವರ್ಷಗಳ ಅವಧಿಗೆ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1. | ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2. | ವೈದ್ಯಕೀಯ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ | ಸಹ ಅಧ್ಯಕ್ಷರು |
| 3. | ಅಪರ ಮುಖ್ಯ ಕಾರ್ಯದರ್ಶಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಸದಸ್ಯರು |
| 7. | ವೈದ್ಯಕೀಯ ಶಿಕ್ಷಣ ನಿರ್ದೇಶಕರು | ಸದಸ್ಯರು |
| 8. | ಉಪ ಕುಲಪತಿ, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು | ಸದಸ್ಯರು |
| 9. | ಡಾ|| ಡಿ. ಚಿನ್ನಯ್ಯ,<br>ಸಂಸ್ಥಾಪಕ, ನಿರ್ದೇಶಕರು ಮತ್ತು ಮಾಜಿ ಪ್ರಾಧ್ಯಾಪಕರು ಮತ್ತು ಹೃದ್ರೋಗ ವಿಭಾಗದ ಮುಖ್ಯಸ್ಥರು, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ನಂ. 61, ಎ, 3ನೇ ಮುಖ್ಯ ರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು | ಸದಸ್ಯರು |
| 10. | ಡಾ|| ಕೆ. ಪೂರ್ಣೇಶ್,<br>ಮಾಜಿ ಪ್ರೊಫೆಸರ್ ಆಫ್ ಸಿ.ಟಿ. ಸರ್ಜರಿ, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ನಂ. 21, ಸಿಲ್ವರ್ ರಾಜ್ ಅಪಾರ್ಟ್‌ಮೆಂಟ್, ವಿ.ಎಂ. ರಸ್ತೆ, ಬೆಂಗಳೂರು-560025. | ಸದಸ್ಯರು |

| | | |
|---|---|---|
| 11. | ಡಾ॥ ಎಸ್. ರಾಮೇಗೌಡ,<br>ಮಾಜಿ ಅಧ್ಯಕ್ಷರು, ಎ.ಐ.ಸಿ.ಟಿ.ಇ. ನಂ. 55, 29ನೇ ಮುಖ್ಯ ರಸ್ತೆ, 1ನೇ ಅಡ್ಡರಸ್ತೆ, 1ನೇ ಹಂತ, ಬಿಟಿಎಂ ಲೇಔಟ್, ಬೆಂಗಳೂರು–560068 | ಸದಸ್ಯರು |
| 12. | ಶ್ರೀ ಬಿ.ಎನ್. ವಿಜಯ್‌ಕುಮಾರ್,<br>ವಿಧಾನಸಭಾ ಸದಸ್ಯರು, ಜಯನಗರ ವಿಧಾನಸಭಾ ಕ್ಷೇತ್ರ, ಬೆಂಗಳೂರು | ಸದಸ್ಯರು |
| 13. | ಶ್ರೀ ಎ.ಸಿ. ಷಡಾಕ್ಷರಿ,<br>ಶ್ರೀ ಜಯದೇವ ಟ್ರಸ್ಟ್, ನಂ. 77, ಸರ್ವೇಯರ್ ಸ್ಟ್ರೀಟ್, ಬಸವನಗುಡಿ, ಬೆಂಗಳೂರು–560004 | ಸದಸ್ಯರು |
| 14. | ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಜಯದೇವ ಹೃದ್ರೋಗ ವಿಜ್ಞಾನ ಹಾಗೂ ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ಸಂಸ್ಥೆಯ ಆಡಳಿತ ಮಂಡಳಿಯನ್ನು ಸರ್ಕಾರದ ಆದೇಶ ಸಂಖ್ಯೆ : ಆಕುಕ 49 ಪಿಟಿಡಿ 2006, ದಿನಾಂಕ : 16–03–2006 ರಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಆಡಳಿತ ಮಂಡಳಿಯನ್ನು ಪುನರ್‌ರಚಿಸಲಾಗಿದ್ದು, ಪುನರ್‌ರಚಿತ ಮಂಡಳಿಯ ಕ್ರಮ ಸಂಖ್ಯೆ : 11 ರಲ್ಲಿನ ಸದಸ್ಯರಾದ ಶ್ರೀ ಎಸ್. ರಾಮೇಗೌಡ, ಮಾಜಿ ಅಧ್ಯಕ್ಷರು, ಎ.ಐ.ಸಿ.ಟಿ.ಇ. ಬೆಂಗಳೂರು ಇವರು ನಿಧನರಾಗಿರುವುದರಿಂದ, ಇವರ ಸ್ಥಳಕ್ಕೆ ಶ್ರೀ ಎನ್.ವೈ. ಗೋಪಾಲಕೃಷ್ಣ, ಶಾಸಕರು, ಬಳ್ಳಾರಿ (ಗ್ರಾ) ಇವರನ್ನು ಸದಸ್ಯರನ್ನಾಗಿ ನೇಮಿಸಲು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಪರಿಶೀಲಿಸಿದ ನಂತರ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರಾಗಿದ್ದ ಡಾ॥ ಎಸ್. ರಾಮೇಗೌಡ ಇವರ ನಿಧನದಿಂದ ತೆರವಾಗಿರುವ ಜಾಗಕ್ಕೆ ಶ್ರೀ ಎನ್.ವೈ. ಗೋಪಾಲಕೃಷ್ಣ, ಶಾಸಕರು, ಬಳ್ಳಾರಿ (ಗ್ರಾ), ಇವರನ್ನು ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ನೇಮಿಸಲು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 413 ಎಂಎಸ್‌ಎಫ್ 2014, ಬೆಂಗಳೂರು, ದಿನಾಂಕ : 20–11–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರಾದ ಡಾ॥ ಎಸ್. ರಾಮೇಗೌಡ ಇವರ ನಿಧನದಿಂದ ತೆರವಾದ ಜಾಗಕ್ಕೆ ಶ್ರೀ ಎನ್.ವೈ. ಗೋಪಾಲಕೃಷ್ಣ, ಶಾಸಕರು, ಬಳ್ಳಾರಿ (ಗ್ರಾ), ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 920

**ಬಿ.ಆರ್. ನಾಗಭೂಷಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2014–15ನೇ ಮುಂಗಾರು ಋತುವಿನ ಅವಧಿಗೆ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸುವ ಮೆಕ್ಕೆಜೋಳ ಖರೀದಿ ಪ್ರಕ್ರಿಯೆಯ ಮುಂಜಾಗ್ರತ ಕ್ರಮದ ಬಗ್ಗೆ.

**ಓದಲಾಗಿದೆ :** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : 4(1)/2013–Py.I, ದಿನಾಂಕ : 7–7–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ 2014–15ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಮೆಕ್ಕೆಜೋಳ ಧಾನ್ಯದ ದರವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1,310/–ರಂತೆ (ಒಂದು ಸಾವಿರದ ಮುನ್ನೂರ ಹತ್ತು ಮಾತ್ರ) ನಿಗಧಿಪಡಿಸಿರುತ್ತದೆ. ಪ್ರಸ್ತುತ, ಮುಂಗಾರು ಋತುವಿನ (ಕೆಎಂಎಸ್) ಮೆಕ್ಕಜೋಳ ಆವಕವು ಶೀಘ್ರವಾಗಿ ಮಾರುಕಟ್ಟೆಗೆ ಬರುವ ಸಾಧ್ಯತೆಯಿದ್ದು, ಇದರಿಂದ ಮಾರುಕಟ್ಟೆ ದರ ಕುಸಿತವುಂಟಾಗುವ ಸಾಧ್ಯತೆಯಿರುತ್ತದೆ. ಈ ಹಿನ್ನೆಲೆಯಲ್ಲಿ ಸಣ್ಣ ಮತ್ತು ಮಧ್ಯಮ ವರ್ಗದ ರೈತರ ಹಿತವನ್ನು ಕಾಪಾಡುವ ದೃಷ್ಟಿಯಿಂದ ರಾಜ್ಯದಾದ್ಯಂತ ಮೆಕ್ಕೆಜೋಳ ದಾಸ್ತಾನನ್ನು ಖರೀದಿಸಲು ಜಿಲ್ಲೆಗಳಲ್ಲಿ ಎಲ್ಲಾ ಅಗತ್ಯ ಮುಂಜಾಗ್ರತ ಕ್ರಮ ಕೈಗೊಳ್ಳಬೇಕಾಗಿದೆ. ಆದ್ದರಿಂದ, ರಾಜ್ಯ ಸರ್ಕಾರವು 2014–15ನೇ ಸಾಲಿನಲ್ಲಿ ರೈತರಿಂದ ಖರೀದಿಸುವ ಮೆಕ್ಕೆಜೋಳ ದಾಸ್ತಾನಿಗೆ ಸಂಗ್ರಹಣಾ ಏಜೆನ್ಸಿಯನ್ನು ಮತ್ತು ಜಿಲ್ಲೆಗಳನ್ನು ಹಂಚಿಕೆ ಮಾಡಬೇಕಾಗಿರುತ್ತದೆ. ಇದಲ್ಲದೆ, ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಜಿಲ್ಲಾ ಕಾರ್ಯಪಡೆ ಸಭೆಯನ್ನು (ಟಾಸ್ಕ್ ಫೋರ್ಸ್ ಸಮಿತಿ) ಕರೆದು ಸ್ಥಳೀಯ ಸಮಸ್ಯೆಗಳ ಸಾಧಕ/ಬಾಧಕಗಳ ಕುರಿತು ಚರ್ಚಿಸಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ, ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಆನಾಸ 66 ಆರ್‌ಪಿಆರ್ 2014 (ಭಾಗ), ಬೆಂಗಳೂರು, ದಿನಾಂಕ : 26–11–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2014–15ನೇ ಸಾಲಿನ ಮುಂಗಾರು ಋತುವಿನಲ್ಲಿ ರಾಜ್ಯದಾದ್ಯಂತ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಮೆಕ್ಕೆಜೋಳ ದಾಸ್ತಾನನ್ನು ಖರೀದಿಸಿ, ಸಂಗ್ರಹಣೆ ಮಾಡಲು ಈ ಕೆಳಕಂಡ ಸಂಗ್ರಹಣಾ ಏಜನ್ಸಿಗಳನ್ನು ನೇಮಿಸಿ, ಜಿಲ್ಲೆಗಳನ್ನು ಹಂಚಿಕೆ ಮಾಡಲಾಗಿದೆ.

| ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ | ಕರ್ನಾಟಕ ರಾಜ್ಯ ಉಗ್ರಾಣ ನಿಗಮ | ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಹಾಮಂಡಳ |
|---|---|---|
| 1)ಬೆಂಗಳೂರು ನಗರ/ಪಟ್ಟಣ<br>2) ಬೆಂಗಳೂರು ಗ್ರಾಮಾಂತರ<br>3) ಬಾಗಲಕೋಟೆ<br>4) ಬಳ್ಳಾರಿ 5) ಚಿಕ್ಕಮಗಳೂರು<br>6) ಚಿಕ್ಕಬಳ್ಳಾಪುರ 7) ಚಾಮರಾಜನಗರ 8) ಹಾವೇರಿ 9) ಕಾರವಾರ 10) ಕೊಡಗು 11) ಕೋಲಾರ 12) ಮಂಡ್ಯ 13) ಮೈಸೂರು 14) ರಾಯಚೂರು 15) ರಾಮನಗರ 16, ತುಮಕೂರು 17) ಉಡುಪಿ 18) ಯಾದಗಿರಿ | 1) ಚಿತ್ರದುರ್ಗ<br>2) ದಾವಣಗೆರೆ<br>3) ಶಿವಮೊಗ್ಗ | 1) ಬೆಳಗಾವಿ<br>2) ಬಿಜಾಪುರ<br>3) ಧಾರವಾಡ<br>4) ಗದಗ<br>5) ಹಾಸನ<br>6) ಕೊಪ್ಪಳ |

2) 2014–15ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಮೆಕ್ಕೆಜೋಳ ಧಾನ್ಯದ ದರವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1,310/–ರ (ಒಂದು ಸಾವಿರದ ಮುನ್ನೂರ ಹತ್ತು ಮಾತ್ರ) ದರದಲ್ಲಿ ಸಣ್ಣ ಮತ್ತು ಮಧ್ಯಮ ವರ್ಗದ ರೈತರಿಂದ ಮಾತ್ರ ಖರೀದಿಸತಕ್ಕದ್ದು.

3) ಜಿಲ್ಲಾಧಿಕಾರಿಗಳು ಜಿಲ್ಲಾ ಕಾರ್ಯಪಡೆ ಸಭೆಯನ್ನು (ಟಾಸ್ಕ್ ಫೋರ್ಸ್ ಸಮಿತಿ) ಕರೆದು ಸ್ಥಳೀಯ ಸಮಸ್ಯೆಗಳ ಸಾಧಕ/ಬಾಧಕಗಳ ಕುರಿತು ಚರ್ಚಿಸಿ ಮುಂಜಾಗ್ರತ ಕ್ರಮ ತೆಗೆದುಕೊಳ್ಳುವುದು

4) 2014–15ನೇ ಸಾಲಿನ ಮೆಕ್ಕೆಜೋಳ ಖರೀದಿಯ ಮುಂಚೆ ದಾಸ್ತಾನಿನ ಎಫ್‌ಎಕ್ಯೂ ಗುಣಮಟ್ಟವನ್ನು ನಿರ್ಧರಿಸುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಗುಣಮಟ್ಟ ಪರಿಶೀಲಿಸಲು ಏಜೆನ್ಸಿಯನ್ನು ನೇಮಕ ಮಾಡತಕ್ಕದ್ದು (Third party assayers)

5) ಮೆಕ್ಕೆಜೋಳ ಖರೀದಿಯ ಪ್ರಾರಂಭದ ದಿನಾಂಕವನ್ನು ನಂತರದ ದಿನಗಳಲ್ಲಿ ತಿಳಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ. ಪ್ರಭಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 921**
**SC-200**

## ಕಂದಾಯ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆಯ, ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ಸ.ನಂ.366ರ ಪೈಕಿ 4–38ಎಕರೆ ಜಮೀನನ್ನು ಪರಭಾರೆ ಮಾಡಲು ಅನುಮತಿ ನೀಡುವ ಕುರಿತು.

**ಓದಲಾಗಿದೆ :**
1) ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಇವರ ಪತ್ರ ಸಂ. ಪ್ರಾಆಬೆ/ಭೂಮಿ–IV/LND/ಸಿಆರ್–70/2012–13, ದಿನಾಂಕ : 05–06–2014.
2) ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಆದೇಶ ಸಂ. ಎಲ್‌ಎನ್‌ಡಿ 1 ಡಿ.ಎಸ್‌ಆರ್–142/85–86, ದಿನಾಂಕ : 23–10–1987.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 05–06–2014ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ಸ.ನಂ. 366ರ ಪೈಕಿ 4–38 ಎಕರೆ ಜಮೀನನ್ನು ಹಂಚು ಮತ್ತು ಚೀನಿ ಮಣ್ಣಿನ ಪಾತ್ರೆ ತಯಾರಿಸುವ ಕೈಗಾರಿಕೆಯನ್ನು ಸ್ಥಾಪಿಸಲು ಶ್ರೀ ಪ್ರಕಾಶ ಎಸ್. ಪ್ರಭು ವ್ಯವಸ್ಥಾಪಕ ನಿರ್ದೇಶಕರು, ಕರಾವಳಿ ಟೈಲ್ಸ್ & ಸೆರಮಿಕ್ಸ್ ಪ್ರೈಲಿ ಬೆಳಸೆ ಇವರಿಗೆ ದಿನಾಂಕ : 23–10–1987ರಲ್ಲಿ ಮಂಜೂರು ಮಾಡಲಾಗಿದ್ದು, ಈಗ ಸದರಿ ಜಮೀನನ್ನು ಆರ್ಥಿಕ ಮುಗ್ಗಟ್ಟಿನ ನಿವಾರಣೆಗಾಗಿ ಪರಭಾರೆ ಮಾಡಲು ಅನುಮತಿ ಕೋರಿರುತ್ತಾರೆ.

ಶ್ರೀ ಪ್ರಕಾಶ ಎಸ್. ಪ್ರಭು ವ್ಯವಸ್ಥಾಪಕ ನಿರ್ದೇಶಕರು ಕರಾವಳಿ ಟೈಲ್ಸ್ & ಸಿರಾಮಿಕ್ಸ್ ಪ್ರೈಲಿ ಬೆಳಸೆ ಇವರಿಗೆ ಬೆಳಸೆ ಗ್ರಾಮದ ಸ.ನಂ. 366 ಕ್ಷೇತ್ರದಲ್ಲಿ 9–24–0 ಹಾಗೂ 0–10–0 ಖರಾಬ ಜಮೀನಿನ ಪೈಕಿ 4–38–0 ಕ್ಷೇತ್ರ ಜಮೀನು ಜಿಲ್ಲಾಧಿಕಾರಿಗಳು ಉತ್ತರ ಕನ್ನಡ ಜಿಲ್ಲೆ ರವರ ಆದೇಶ ಸಂಖ್ಯೆ : ಎಲ್.ಎನ್.ಡಿ1 : ಡಿಎಸ್‌ಆರ್–142 : 85–86, ದಿನಾಂಕ : 23–10–1987ರಂದು ಕೆಲವು ಷರತ್ತುಗಳನ್ನು ವಿಧಿಸಿ ಮಂಜೂರು ಮಾಡಲಾಗಿತ್ತು.

ಸದರಿ ಕೈಗಾರಿಕೆಯು ಅಂದಾಜು 1.61 ಕೋಟಿ ಬಂಡವಾಳ ಹೂಡಿ ಹಂಚಿನ ಮತ್ತು ಚೀನಿ ಮಣ್ಣಿನ ಸಾಮಗ್ರಿಗಳನ್ನು ತಯಾರಿಸುವ ಉದ್ದಿಮೆಯನ್ನು ಸ್ಥಾಪಿಸಿದ್ದು, 2001 ರಿಂದಲು ಸದರಿ ಉದ್ದಿಮೆಯು ಭಾರಿ ಹಿನ್ನೆಡೆ ಅನುಭವಿಸಿದ್ದರಿಂದ ಅರ್ಜಿದಾರರು ಈ ಕಾರ್ಖಾನೆಯನ್ನು ಸ್ಥಗಿತಗೊಳಿಸಿ ಬಂಡವಾಳಕ್ಕಾಗಿ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಿಂದ ಸಾಲ ಪಡೆದು 2009 ರಲ್ಲಿ ಒಂದು ಭಾರಿ ಒಪ್ಪಂದದ ಮೂಲಕ (One Time Settlement) ಮರುಪಾವತಿಸಿದ್ದು ಈ ಸಂಬಂಧ ಅಂಕೋಲಾ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್ ಲಿ., ರವರಿಂದ ರೂ. 71,73,646.30 ಸಾಲ ಪಡೆದು ತೀವ್ರ ಆರ್ಥಿಕ ಸಂಕಷ್ಟಕ್ಕೆ ಒಳಪಟ್ಟಿರುವುದರಿಂದ ಜಮೀನನ್ನು ಪರಭಾರೆ ಮಾಡಲು ಅನುಮತಿ ಕೋರಿರುತ್ತಾರೆ.

ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 22(1)(ಐ) ಪ್ರಕಾರ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದ್ದ ಜಮೀನುಗಳನ್ನು ಮಂಜೂರಿ ದಿನಾಂಕದಿಂದ 30 ವರ್ಷಗಳವರೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೇ ಮಾರಾಟ, ಹಸ್ತಾಂತರ, ಅಡಮಾನ ಪರಭಾರೆ ಇತ್ಯಾದಿ ಮಾಡತಕ್ಕದಲ್ಲ, 30 ವರ್ಷಗಳ ನಂತರ ಮಂಜೂರಿದಾರರು ಜಮೀನನ್ನು ಯಾವುದೇ ರೀತಿಯ ಪರಭಾರೆ ಮಾಡಲು ಬಯಸಿದ್ದಲ್ಲಿ ಪ್ರಥಮವಾಗಿ ಸರ್ಕಾರಕ್ಕೆ ಒಪ್ಪಿಸಬೇಕಿದ್ದು ಒಂದುವೇಳೆ ಸರ್ಕಾರವು ಇಚ್ಛಿಸದೇ ಇದ್ದಲ್ಲಿ ಅನ್ಯರಿಗೆ ಮಾರಾಟ ಮಾಡಲು ಅವಕಾಶವಿರುತ್ತದೆ ಆದರೆ ಅರ್ಜಿದಾರರಿಗೆ ಜಮೀನು ಮಂಜೂರಾಗಿ 30 ವರ್ಷಗಳು ಕಳೆದಿರುವುದಿಲ್ಲ ಸದರಿ ಗ್ರಾಮದಲ್ಲಿ ಅಂದಾಜು 90–00–00 ಕ್ಷೇತ್ರ ಗಾಯರಾಣಾ ಗ್ರಾಮ ಲಭ್ಯವಿದ್ದು ಸರ್ಕಾರಿ ಉದ್ದೇಶಕ್ಕಾಗಿ ಜಮೀನಿನ ಬೇಡಿಕೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಅರ್ಜಿದಾರರು ಆರ್ಥಿಕ ಸಂಕಷ್ಟದಲ್ಲಿದ್ದು ಪ್ರಸ್ತಾಪಿತ ಜಮೀನು ಸರ್ಕಾರಕ್ಕೆ ಅವಶ್ಯಕತೆಯಿಲ್ಲದೆ ಇರುವುದರಿಂದ ಹಾಗೂ ಅರ್ಜಿದಾರರು ಬ್ಯಾಂಕಿನಿಂದ ಪಡೆದ ಸಾಲ ತೀರಿಸಬೇಕಾದ ಅನಿವಾರ್ಯತೆ ಇರುವುದರಿಂದ, ಸದರಿ ವಿಷಯದ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯ ಪಡೆಯಲಾಗಿ, ಕಾನೂನು ಇಲಾಖೆಯು ಸದರಿ ಜಮೀನನ್ನು ಮಾರಾಟ ಮಾಡಲು ಅಭ್ಯಂತರವಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತದೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 20 ಎಲ್‌ಜಿಎನ್ 2014, ಬೆಂಗಳೂರು, ದಿನಾಂಕ : 03–12–2014.**

ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜಿಲ್ಲಾಧಿಕಾರಿ, ಉತ್ತರಕನ್ನಡ ಜಿಲ್ಲೆ, ಕಾರವಾರ ರವರ ದಿನಾಂಕ : 23–10–1987ರ ಆದೇಶದಲ್ಲಿನ ಷರತ್ತು–1 ಮತ್ತು ಷರತ್ತು–2ನ್ನು ಸಡಿಲಿಸಿ, ಮಂಜೂರಿದಾರರಾದ ಶ್ರೀ ಪ್ರಕಾಶ ಎಸ್. ಪ್ರಭು, ವ್ಯವಸ್ಥಾಪಕ ನಿರ್ದೇಶಕರು ಕರಾವಳಿ ಟೈಲ್ಸ್ & ಸಿರಾಮಿಕ್ಸ್ ಪ್ರೈ.ಲಿ. ಬೆಳಸೆ ಇವರಿಗೆ ಉತ್ತರ ಕನ್ನಡ ಜಿಲ್ಲೆ, ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ರಿ.ಸ.ನಂ. 366 ಕ್ಷೇತ್ರ 4–38 ಎಕರೆ ಜಮೀನನ್ನು ಪರಭಾರೆ ಮಾಡಲು ಅನುಮತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ–2).

**P.R. 922**
**SC-25**

**ಸಹಕಾರ ಸಚಿವಾಲಯ**

**ವಿಷಯ :** 2014–15ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆಯ ಮೂಲ ಸೌಕರ್ಯ ಸ್ಥಾಪನೆಗೆ ಅನುದಾನ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಇ 117 ಸಂಮಾಸ 2014, ದಿನಾಂಕ : 22–7–2014 ಹಾಗೂ ದಿನಾಂಕ : 19–09–2014.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 05 ಟಿಎಫ್‌ಪಿ 2014, ದಿನಾಂಕ : 14–10–2014.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಓಟಿಎಸ್–2/ಲ್ಯಾಂಪ್ಸ್/34/2014–15, ದಿನಾಂಕ : 20–10–2014 ಮತ್ತು ದಿನಾಂಕ : 25–11–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ 2014–15ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆಯ ಮೂಲ ಸೌಕರ್ಯ ಸ್ಥಾಪನೆಗೆ **ಲೆಕ್ಕ ಶೀರ್ಷಿಕೆ 2425–00–108–0–39,** ಗಿರಿಜನ ಉಪ ಯೋಜನೆ 423 ರಡಿಯಲ್ಲಿ **ರೂ. 32.00 ಲಕ್ಷ**ಗಳ ಆಯ–ವ್ಯಯದಲ್ಲಿ ಕಲ್ಪಿಸಿರುವ ಅವಕಾಶದ ಪೈಕಿ ಮೊದಲನೆಯ ಹಾಗೂ ಎರಡನೆಯ ತ್ರೈಮಾಸಿಕ ತಲಾ ರೂ. 8.00 ಲಕ್ಷಗಳಂತೆ ಒಟ್ಟು ರೂ. 16.00 ಲಕ್ಷಗಳನ್ನು ಈಗಾಗಲೇ ಬಿಡುಗಡೆಗೊಳಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರ ಆದೇಶದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 25 ರಷ್ಟನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ (3)ರ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಈ ಯೋಜನೆಯಲ್ಲಿ ಮೊದಲೆರಡು ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆಯಾಗಿರುವ ರೂ. 16.00 ಲಕ್ಷಗಳು ಪೂರ್ಣ ಬಳಕೆಯಾಗಿರುವುದಾಗಿ ಸಹಕಾರ ಸಂಘಗಳ ನಿಬಂಧಕರು ದೃಢೀಕೃತ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ. ಹಾಗೂ ಮೂರನೆಯ ತ್ರೈಮಾಸಿಕದ ರೂ. 8.00 ಲಕ್ಷಗಳನ್ನು ಸಂಬಂಧಿಸಿದ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿ ಬಿಡುಗಡೆಗೊಳಿಸಲು ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 117 ಸಂಮಾಸ 2014, ಬೆಂಗಳೂರು, ದಿನಾಂಕ : 06–12–2014.**

ರಾಜ್ಯ ಯೋಜನೆಯಡಿಯಲ್ಲಿ 2014–15ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆಯ ಮೂಲ ಸೌಕರ್ಯ ಸ್ಥಾಪನೆಗೆ **ಲೆಕ್ಕ ಶೀರ್ಷಿಕೆ 2425–00–108–0–39,** ಗಿರಿಜನ ಉಪ ಯೋಜನೆ **423 ರಡಿಯಲ್ಲಿ ರೂ. 32.00 ಲಕ್ಷ**ಗಳ ಆಯ–ವ್ಯಯ ಅವಕಾಶ ಕಲ್ಪಿಸಿದ್ದು, ಮೂರನೆಯ ತ್ರೈಮಾಸಿಕದ ಶೇ. 25ರಷ್ಟನ್ನು ಅಂದರೆ **ರೂ. 8.00 ಲಕ್ಷಗಳನ್ನು (ಎಂಟು ಲಕ್ಷ ರೂಪಾಯಿಗಳು ಮಾತ್ರ)** ಈ ಕೆಳಕಂಡ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿ ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಲ್ಯಾಂಪ್ಸ್ ಸಹಕಾರ ಸಂಘಗಳ ಹೆಸರು | ಮೂರನೆಯ ತ್ರೈಮಾಸಿಕ ಕಂತು ಬಿಡುಗಡೆಗೊಳಿಸಿದ ಮೊತ್ತ ರೂ (ಲಕ್ಷಗಳಲ್ಲಿ) |
|---|---|---|
| 01 | ಕಾರ್ಕಳ ತಾಲ್ಲೂಕು ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., (ಲ್ಯಾಂಪ್ಸ್) ಕಾರ್ಕಳ, ಉಡುಪಿ ಜಿಲ್ಲೆ | 1–75 |
| 02 | ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಚಾಮರಾಜನಗರ ಜಿಲ್ಲೆ | 2–00 |
| 03 | ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಬಿಳಿಗಿರಿರಂಗನಬೆಟ್ಟ ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ | 3–00 |
| 04 | ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., (ಲ್ಯಾಂಪ್ಸ್) ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ | 1–25 |
| | **ಒಟ್ಟು** | **8–00** |

**ಷರತ್ತುಗಳು :**

1. ಈ ಅನುದಾನ ವೆಚ್ಚವನ್ನು **2014–15ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–39,** ಗಿರಿಜನ ಉಪಯೋಜನೆ **423 ರಡಿಯಲ್ಲಿ ಭರಿಸತಕ್ಕದ್ದು.**
2. ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿ., ಮೈಸೂರು ಇವರು ಯೋಜನೆಯಲ್ಲಿ ಪಡೆದ ಹಣವನ್ನು ಯೋಜನೆಯ ಪ್ರಗತಿಗನುಗುಣವಾಗಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಬಿಡುಗಡೆ ಮಾಡುವುದು.
3. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸುವ ಷರತ್ತಿಗೊಳಪಟ್ಟು ಕಾಮಗಾರಿಗಳನ್ನು ನಿರ್ವಹಿಸುವುದು.
4. ಸಹಕಾರ ಸಂಘಗಳ ನಿಬಂಧಕರು ಲ್ಯಾಂಪ್ಸ್ ಸಹಕಾರ ಸಂಘಗಳು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು ಮತ್ತು ಅನುದಾನದ ವಿನಿಯೋಗದ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಪಡೆದು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮಂಜೂರು ಮಾಡಿದ ಅನುದಾನ ರೂ. 8.00 ಲಕ್ಷ (ಎಂಟು ಲಕ್ಷ ರೂಪಾಯಿಗಳನ್ನು ಮಾತ್ರ) ಗಳನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳದಿಂದ ಸ್ವೀಕೃತಿಯನ್ನು ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಉಡುಪಿ, ಚಾಮರಾಜನಗರ ಜಿಲ್ಲೆ ಹಾಗೂ ದಕ್ಷಿಣ ಕನ್ನಡ ಜಿಲ್ಲೆ ಇವರಿಗೆ ಅಧಿಕಾರ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಸಇ 189 ಆಂಆಸ 2014, ದಿನಾಂಕ : 03–12–2014 ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 05 ಟಿಎಫ್‌ಪಿ 2014, ದಿನಾಂಕ : 14–10–2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 923**

**SC-50**

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ :** ಕೆ.ಜಿ.ಎಫ್. ಕಂದಾಯ ತಾಲ್ಲೂಕು, ಕೋಲಾರ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ : ಲಾ 122 ಎಲ್‌ಸಿಎಲ್ 2013, ದಿನಾಂಕ : 06–08–2013.
2. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆರವರ ಪತ್ರ ದಿನಾಂಕ :27–09–2013.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಜಿಲ್ಲೆರವರ ಪತ್ರ ದಿನಾಂಕ : 09–07–2014.

**ಪ್ರಸ್ತಾವನೆ :**

ಕೋಲಾರ ಜಿಲ್ಲೆಯ ಕೆ.ಜಿ.ಎಫ್. ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಸಾರ್ವಜನಿಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ : 06–08–2013ರ ಪತ್ರದಲ್ಲಿ ಕೋಲಾರ ಜಿಲ್ಲೆಯ ಕೆ.ಜಿ.ಎಫ್. ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ಮೇಲೆ ಓದಲಾದ (2)ರ ದಿನಾಂಕ : 27–09–2013ರ ಪತ್ರದಲ್ಲಿ ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕುರವರ ಪತ್ರದ ವರದಿಯನ್ನು ಲಗತ್ತಿಸಿ, ಕೆ.ಜಿ.ಎಫ್. ಕಂದಾಯ ತಾಲ್ಲೂಕಿನಲ್ಲಿ ಹಾಲಿ 02 ನೋಟರಿಗಳು ಕೆಲಸ ನಿರ್ವಹಿಸುತ್ತಿದ್ದು, ಕೆ.ಜಿ.ಎಫ್.

ನಗರದಲ್ಲಿ ಸುಮಾರು 1,80,000 ಜನಸಂಖ್ಯೆಯು ಇದ್ದು, ಇಬ್ಬರು ನೋಟರಿಗಳಿಗೂ ಕೆಲಸದ ಒತ್ತಡ ಹೆಚ್ಚಾಗಿರುವುದರಿಂದ, ಇನ್ನೊಬ್ಬ ನೋಟರಿಯವರ ಅವಶ್ಯಕತೆ ಇದೆ ಎಂದು ವರದಿ ಮಾಡಿರುತ್ತಾರೆ.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಜಿಲ್ಲೆ ಇವರು, ಮೇಲೆ ಓದಲಾದ (3)ರ ದಿನಾಂಕ : 09–07–2014ರ ಪತ್ರದಲ್ಲಿ ಕೆ.ಜಿ.ಎಫ್. ಕಂದಾಯ ತಾಲ್ಲೂಕಿನಲ್ಲಿ ಐದು ನ್ಯಾಯಾಲಯಗಳು ಕಾರ್ಯನಿರ್ವಹಿಸುತ್ತಿದ್ದು, ಇರುವ ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವುದರಿಂದ, ಕೋಲಾರ ಜಿಲ್ಲೆಯ ಕೆ.ಜಿ.ಎಫ್. ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 122 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ : 27–11–2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೋಲಾರ ಜಿಲ್ಲೆಯ ಕೆ.ಜಿ.ಎಫ್. ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

**PR. 924**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ–2).

## ಕಂದಾಯ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ಕುರಗೋಡ ಗ್ರಾಮದ ರಿ.ಸ.ನಂ. 41ರಲ್ಲಿ ಕ್ಷೇತ್ರ 23–20 ಎಕರೆ/ಗುಂಟೆ ಜಮೀನನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು ಶ್ರೀ ಪ್ರಭುಲಿಂಗೇಶ್ವರ–ಶುಗರ್‍ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್, ಸಿದ್ದಾಪುರ, ಜಮಖಂಡಿ ತಾಲ್ಲೂಕು ಇವರ ಪರವಾಗಿ ಅರಣ್ಯ ಇಲಾಖೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ : ಪ್ರಾಆಬೆ/ಭೂಮಿ/4/ ಎಲ್‌ಜಿಎಲ್/ಸಿಆರ್–21/2014–15, ದಿನಾಂಕ : 30–09–2014.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 30–09–2014ರ ಪತ್ರದಲ್ಲಿ, ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ಕುರಗೋಡ ಗ್ರಾಮದ ರಿ.ಸ.ನಂ. 41ರಲ್ಲಿ ಕ್ಷೇತ್ರ 23–20 ಎಕರೆ/ಗುಂಟೆ (9.51 ಹೆಕ್ಟೇರ್) ಜಮೀನನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು, ಶ್ರೀ ಪ್ರಭುಲಿಂಗೇಶ್ವರ ಶುಗರ್‍ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್, ಸಿದ್ದಾಪುರ, ಜಮಖಂಡಿ–ತಾಲ್ಲೂಕು ಇವರ ಪರವಾಗಿ ಅರಣ್ಯ ಇಲಾಖೆ ವರ್ಗಾಯಿಸುವ ಬಗ್ಗೆ ಅನುಮತಿ ನೀಡುವ ಕುರಿತು ಜಿಲ್ಲಾಧಿಕಾರಿ, ಬಾಗಲಕೋಟೆ ಇವರು ಕೋರಿರುತ್ತಾರೆಂದು ಪ್ರಸ್ತಾಪಿಸಲಾಗಿದೆ.

ಶ್ರೀ ಪ್ರಭುಲಿಂಗೇಶ್ವರ ಶುಗರ್‍ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್, ಸಿದ್ದಾಪುರ, ಇವರು 110 ಕೆ.ವಿ. ವಿದ್ಯುತ್ ಲೈನ್ ಎಳೆಯಲು ಮತ್ತು ನೀರಿನ ಪೈಪ್‌ಗಳನ್ನು ಅಳವಡಿಸಲು ಬಳಸಿದ ಅರಣ್ಯ ಜಮೀನಿಗೆ ಪರಿಹಾರತ್ಮಕವಾಗಿ ಈಗಾಗಲೇ ಹನಗುಂಡಿ ಗ್ರಾಮದ ರಿ.ಸ.ನಂ. 13ಅ ರಲ್ಲಿ 23–20 ಎಕರೆ/ಗುಂಟೆ ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸಲಾಗಿರುತ್ತದೆಂದು ತಿಳಿಸಿರುತ್ತಾರೆ. ಅರಣ್ಯ ಇಲಾಖೆಗೆ ವರ್ಗಾಯಿಸಲಾದ ಪ್ರದೇಶವು ಕಲ್ಲುಗುಡ್ಡಗಳಿಂದ ಕೂಡಿದ್ದು, ಅರಣ್ಯ ಸಂರಕ್ಷಣಾಧಿಕಾರಿ, ಬಾಗಲಕೋಟೆ, ಇವರು ತಿಳಿಸಿದ್ದರಿಂದ ಸದರಿ ಜಮೀನಿನ ಭೂ ಮಂಜೂರಾತಿಯನ್ನು ಕೈಬಿಟ್ಟು ಪರ್ಯಾಯ ಜಮೀನನ್ನು ಮಂಜೂರು ಮಾಡಿ ಅರಣ್ಯ ಇಲಾಖೆಗೆ ವರ್ಗಾಯಿಸಬೇಕೆಂದು ಕೋರಿದ್ದರನ್ವಯ, ಜಮಖಂಡಿ ತಾಲ್ಲೂಕಿನ ಕುರಗೋಡ ಗ್ರಾಮದ ರಿ.ಸ.ನಂ. 41ರ ಒಟ್ಟು ಕ್ಷೇತ್ರ 251–39 ಎಕರೆ ಡೊಂಗರ ಜಮೀನಿನ ಪೈಕಿ ಕ್ಷೇತ್ರ 23–20 ಎಕರೆ/ಗುಂಟೆ (9.51 ಹೆಕ್ಟೇರ್) ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸುವ ಸಂಬಂಧ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದ್ದಾರೆ. ಮುಂದುವರೆದು, ಪ್ರಸ್ತಾಪಿತ ಜಮೀನು 'ಬಿ' ಖರಾಬು ಜಮೀನಾಗಿದ್ದು, ಈ ಜಮೀನುಗಳು ಖರಾಬು ಲಕ್ಷಣಗಳನ್ನು ಕಳೆದುಕೊಂಡಿದ್ದ ಪ್ರಕರಣಗಳಲ್ಲಿ ಹಾಗೂ ಅವುಗಳು ಸಾರ್ವಜನಿಕ ಉಪಯೋಗಕ್ಕೆ ಬಳಸಲ್ಪಡದೇ ಇರುವ ಸಂದರ್ಭಗಳಲ್ಲಿ ಅವುಗಳನ್ನು ಸಾರ್ವಜನಿಕ ಹಕ್ಕುಗಳಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 68(1) ಮತ್ತು 68(5)ರಡಿ ಸಾರ್ವಜನಿಕ ಉಪಯೋಗಕ್ಕಾಗಿ ಮಂಜೂರು ಮಾಡಲು ಅವಕಾಶವಿರುತ್ತದೆ.

ಶ್ರೀ ಪ್ರಭುಲಿಂಗೇಶ್ವರ ಶುಗರ್‍ಸ್ & ಕೆಮಿಕಲ್ಸ್ ಲಿಮಿಟೆಡ್, ಸಿದ್ದಾಪುರ, ಜಮಖಂಡಿ ತಾಲ್ಲೂಕು ಇವರಿಗೆ 110 ಕೆ.ವಿ. ವಿದ್ಯುತ್ ಸಬ್ ಸ್ಟೇಷನ್ ಮತ್ತು 33 ಕೆ.ವಿ. ವಿದ್ಯುತ್ ಮಾರ್ಗಕ್ಕೆ ಹಾಗೂ ನೀರು ಸರಬರಾಜು ಸಲುವಾಗಿ ಬಳಸಿದ್ದ ಅರಣ್ಯ ಇಲಾಖೆಯ ಜಮೀನಿಗೆ ಪರಿಹಾರಾತ್ಮಕವಾಗಿ ಈಗಾಗಲೇ ಹನಗಂಡಿ ಗ್ರಾಮದ ಸರ್ವೆ ನಂಬರ್ 13ಅ ನೇದ್ದರಲ್ಲಿ 23–30 ಎಕರೆ/ಗುಂಟೆ (9.51 ಹೆಕ್ಟೇರ್) ಜಮೀನು ಮಂಜೂರು ಮಾಡಿ ಅವರಿಂದ ಪ್ರತಿ ಎಕರೆಗೆ ರೂ. 68,000–00 ರಂತೆ 23–30 ಎಕರೆ/ಗುಂಟೆ ಕ್ಷೇತ್ರಕ್ಕೆ ರೂ. 15,98,000–00 ಗಳನ್ನು ಸರ್ಕಾರಕ್ಕೆ ಭರಣಾ ಮಾಡಿಕೊಳ್ಳಲಾಗಿದ್ದು, ಉಪನೋಂದಣಾಧಿಕಾರಿ, ಬಾಗಲಕೋಟೆ ಇವರು ಪ್ರಸ್ತುತ ಮಾರುಕಟ್ಟೆ ಬೆಲೆ ರೂ. 74,500–00 ಎಂದು ವರದಿಯಲ್ಲಿ ತಿಳಿಸಿರುವುದರಿಂದ ವ್ಯತ್ಯಾಸದ ಹಣವನ್ನು ಸಂಸ್ಥೆಯು ಪಾವತಿಸುವ ಷರತ್ತಿಗೊಳಪಟ್ಟು, ಜಮಖಂಡಿ ತಾಲ್ಲೂಕು, ಕುರಗೋಡು ಗ್ರಾಮದ ರಿ.ಸ.ನಂ. 41ರಲ್ಲಿ 23–20 ಎಕರೆ/ಗುಂಟೆ (9.51 ಹೆಕ್ಟೇರ್) ಜಮೀನನ್ನು ಅರಣ್ಯ ಇಲಾಖೆಗೆ ಮಂಜೂರಿಸಲು ಪ್ರಾದೇಶಿಕ ಆಯುಕ್ತರು ಪತ್ರದಲ್ಲಿ ಪ್ರಸ್ತಾಪಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 53 ಎಲ್‌ಜಿಜೆ 2014, ಬೆಂಗಳೂರು, ದಿನಾಂಕ : 01–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಪ್ರಭುಲಿಂಗೇಶ್ವರ ಶುಗರ್‍ಸ್ ಮತ್ತು ಕೆಮಿಕಲ್ಸ್ ಲಿ. ಸಿದ್ದಾಪುರ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಇವರು 110 ಕೆ.ವಿ. ವಿದ್ಯುತ್ ಲೈನ್ ಎಳೆಯಲು ಮತ್ತು ನೀರಿನ ಪೈಪ್‌ಗಳನ್ನು ಅಳವಡಿಸಲು ಬಳಸಿದ ಅರಣ್ಯ ಜಮೀನಿಗೆ ಪರಿಹಾರಾತ್ಮಕವಾಗಿ ಈಗಾಗಲೇ ಹನಗಂಡಿ ಗ್ರಾಮದ ರಿ.ಸ.ನಂ. 13ಅರಲ್ಲಿ 23–20 ಎಕರೆ/ಗುಂಟೆ (9.51 ಹೆಕ್ಟೇರ್) ಜಮೀನನ್ನು ಅರಣ್ಯ ಇಲಾಖೆಗೆ

ವರ್ಗಾಯಿಸಿರುವ ಪ್ರದೇಶವು ನೆಡುತೋಪು ಬೆಳೆಸಲು ಯೋಗ್ಯವಾಗಿರುವುದಿಲ್ಲವಾದ್ದರಿಂದ ಸದರಿ ಜಮೀನಿನ ಮಂಜೂರಾತಿಯನ್ನು ರದ್ದುಪಡಿಸಿ, ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕಿನ ಕುರಗೋಡ ಗ್ರಾಮದ ರಿ.ಸ.ನಂ. 41ರಲ್ಲಿ ಒಟ್ಟು ಕ್ಷೇತ್ರ 251–39 ಎಕರೆ/ಗುಂಟೆ ಡೊಂಗರ ಜಮೀನಿನ ಪೈಕಿ 23–20 ಎಕರೆ/ಗುಂಟೆ (9.51 ಹೆಕ್ಟೇರ್) ಜಮೀನನ್ನು ಪ್ರಸ್ತಾಪಿತ ಸಂಸ್ಥೆಯ ಪರವಾಗಿ ಪರ್ಯಾಯವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಸದರಿ ಸಂಸ್ಥೆಯು ನೆಟ್ ಪ್ರೆಸೆಂಟ್ ವ್ಯಾಲ್ಯು ಅನ್ನು ಪಾವತಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಕಂದಾಯ ಕಾಯ್ದೆ–1964ರ ಕಲಂ 68(1) ಮತ್ತು 68(5)ರಡಿ ನಿಯಮಾನುಸಾರ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 27ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಇಲಾಖೆಗೆ ಮಂಜೂರು ಮಾಡಿ ಆದೇಶಿಸಿದೆ.

ಶ್ರೀ ಪ್ರಭುಲಿಂಗೇಶ್ವರ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್, ಸಿದ್ದಾಪುರ, ಜಮಖಂಡಿ ತಾಲ್ಲೂಕು ಇವರು ಈಗಾಗಲೇ ಸರ್ಕಾರಕ್ಕೆ ಪಾವತಿಸಿರುವ ಮೌಲ್ಯದೊಂದಿಗೆ ಪ್ರಸ್ತಾಪಿತ ಜಮೀನಿನ ಮಾರುಕಟ್ಟೆ ಬೆಲೆಗೆ ಅನುಗುಣವಾಗಿ ಪ್ರತಿ ಎಕರೆಗೆ ನಿಗಧಿಪಡಿಸಿದಂತೆ ವ್ಯತ್ಯಾಸದ ಹಣ ಪಾವತಿಸುವ ಷರತ್ತಿಗೊಳಪಟ್ಟಿದೆ.

**P.R. 925** ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**SC-25** **ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಮೈಸೂರಿನ ಶ್ರೀ ಚಾಮರಾಜೇಂದ್ರ ಮೃಗಾಲಯದಲ್ಲಿರುವ ಉಪ ನಿರ್ದೇಶಕರ ಹುದ್ದೆಯನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಯಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸದಸ್ಯ ಕಾರ್ಯದರ್ಶಿ, ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ : ಎ3/ಜೆಡ್.ಎ.ಕೆ./ಎಸ್.ಟಿ.ಎಫ್/ ಸಿಆರ್–5/2011–12, ದಿನಾಂಕ : 03–11–2011 ಮತ್ತು 20–04–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 03–11–2011 ಮತ್ತು ದಿನಾಂಕ : 20–04–2012ರ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸದಸ್ಯ ಕಾರ್ಯದರ್ಶಿ, ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇವರು ಮೈಸೂರಿನ ಶ್ರೀಚಾಮರಾಜೇಂದ್ರ ಮೃಗಾಲಯದಲ್ಲಿರುವ ಉಪ ನಿರ್ದೇಶಕರ ಹುದ್ದೆಯನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಯಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಗೆ ಉನ್ನತೀಕರಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ. ಸದರಿ ಹುದ್ದೆಯ ಕಾರ್ಯಭಾರಗಳು ಕೆಳಕಂಡಂತಿರುತ್ತವೆ :

1. ಮೃಗಾಲಯ ಮತ್ತು ಕಾರಂಜಿಕೆರೆ ಪ್ರಕೃತಿ ಉದ್ಯಾನವನದ ನಿರ್ವಹಣೆಯ ಜೊತೆಗೆ ಹೆಚ್ಚುವರಿಯಾಗಿ ಕೇಂದ್ರ ಮೃಗಾಲಯ ಪ್ರಾಧಿಕಾರದ ಆರ್ಥಿಕ ಸಹಾಯಾನುದಾನದೊಂದಿಗೆ ಕಾಯ್ದಿರಿಸಿದ ಅರಣ್ಯ ಪ್ರದೇಶದಲ್ಲಿ ಗೌರ್ ಸಂತತಿ ಅಭಿವೃದ್ಧಿ ಕೇಂದ್ರವನ್ನು ಸ್ಥಾಪಿಸಲಿರುವುದು ಹಾಗೂ
2. ಮೃಗಾಲಯದ ವೀಕ್ಷಕರ ಸಂಖ್ಯೆ ಗಣನೀಯವಾಗಿ ಏರುಗತಿಯಲ್ಲಿರುವುದರಿಂದ ಹಾಗೂ ಮೃಗಾಲಯ ವೀಕ್ಷಕರ ನಿರ್ವಹಣೆ ಪ್ರಮುಖ ಅಂಶವೇ ಆಗಿದ್ದು ಅವರುಗಳಿಗೆ ಅಗತ್ಯವಿರುವ ಅನುಕೂಲತೆಗಳನ್ನು ಒದಗಿಸುವುದನ್ನು ಆದ್ಯತೆಯ ಮೇಲೆ ಪರಿಗಣಿಸಬೇಕಾಗಿರುವುದರಿಂದ ಹಾಗೂ
3. ಸಮೃದ್ಧೀಕರಣ ಚಟುವಟಿಕೆ, ವೈಜ್ಞಾನಿಕ ರೀತಿಯಲ್ಲಿ ಪ್ರಾಣಿಗಳ ಪ್ರದರ್ಶನ, ಮಾಹಿತಿ ಫಲಕಗಳು ಮತ್ತು ಶೈಕ್ಷಣಿಕ ಕಾರ್ಯಕ್ರಮಗಳು, ಪ್ರಾಣಿಗಳ ಆಹಾರ ವಿತರಣಾ ಮತ್ತಿತರ ಪ್ರಮುಖ ಅಂಶಗಳ ಬಗ್ಗೆ ಹೆಚ್ಚಿನ ಕಾರ್ಯತಂತ್ರಗಳ ರಚನೆ ಹಾಗೂ ಅವುಗಳನ್ನು ಕಾರ್ಯಾಚರಣೆ ತರುವುದು.

ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 401 ಎಫ್‌ಡಬ್ಲ್ಯೂಎಲ್ 2011, ಬೆಂಗಳೂರು, ದಿನಾಂಕ : 12–05–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಮೈಸೂರಿನ ಶ್ರೀ ಚಾಮರಾಜೇಂದ್ರ ಮೃಗಾಲಯದಲ್ಲಿರುವ ಉಪ ನಿರ್ದೇಶಕರ ಹುದ್ದೆಯನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಯಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಗೆ ಉನ್ನತೀಕರಿಸಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 697 ವೆಚ್ಚ–5/2012, ದಿನಾಂಕ : 03–09–2012ರಲ್ಲಿ ಸಹಮತಿ ಪಡೆದು ಹೊರಡಿಸಿದೆ.

**PR. 926** ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ. ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿ (Karnataka Eco-tourism Development Board) ಗೆ ಕಾರ್ಯಕಾರಿ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಅಪಜೀ 60 ಎಫ್‌ಡಬ್ಲ್ಯೂಎಲ್ 2010, ದಿನಾಂಕ : 24–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 24–02–2012ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯ ನಿಯಮ ಮತ್ತು ವಿನಿಯಮಗಳು ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ನೇತೃತ್ವದಲ್ಲಿ ಪದನಿಮಿತ್ತ ಅಧಿಕಾರಿಗಳನ್ನೊಳಗೊಂಡ ಸರ್ಕಾರದಿಂದ ನೇಮಿಸಲ್ಪಟ್ಟ ಒಂದು ಕಾರ್ಯಕಾರಿ ಸಮಿತಿಯನ್ನು ರಚಿಸಲು ಅವಕಾಶ ಕಲ್ಪಿಸಿದೆ.

ಆದ್ದರಿಂದ, ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಗೆ ಕಾರ್ಯಕಾರಿ ಸಮಿತಿಯನ್ನು ರಚಿಸಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 64 ಎಫ್‌ಡಬ್ಲ್ಯೂಎಲ್ 2014, ಬೆಂಗಳೂರು, ದಿನಾಂಕ : 26–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯ ಮೆಮೊರಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ರನ್ವಯ ಸದರಿ ಮಂಡಳಿಗೆ ಈ ಕೆಳಕಂಡಂತೆ ಕಾರ್ಯಕಾರಿ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 3. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು | ಸದಸ್ಯರು |
| 4. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯ ಜೀವಿ), ಬೆಂಗಳೂರು | ಸದಸ್ಯರು |
| 5. | ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ) | ಸದಸ್ಯರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಬೃಹತ್ ನೀರಾವರಿ ಇಲಾಖೆ | ಸದಸ್ಯರು |
| 7. | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ | ಸದಸ್ಯರು |
| 8. | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು | ಸದಸ್ಯರು |
| 9. | ವ್ಯವಸ್ಥಾಪಕ ನಿರ್ದೇಶಕರು, ಜಂಗಲ್ ಲಾಡ್ಜಸ್ ಅಂಡ್ ರೆಸಾರ್ಟ್ಸ್ ಲಿಮಿಟೆಡ್, ಬೆಂಗಳೂರು | ಸದಸ್ಯರು |
| 10. | ನಿರ್ದೇಶಕರು, ಮೀನುಗಾರಿಕಾ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು | ಸದಸ್ಯರು |
| 11. | ನಿರ್ದೇಶಕರು, ಇನ್‌ಸ್ಟಿಟ್ಯೂಟ್ ಆಫ್ ಹೋಟಲ್ ಮ್ಯಾನೇಜ್‌ಮೆಂಟ್, ಬೆಂಗಳೂರು | ಸದಸ್ಯರು |
| 12. | ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲಾಬಾಗ್, ಬೆಂಗಳೂರು | ಸದಸ್ಯರು |
| 13. | ವ್ಯವಸ್ಥಾಪಕ ನಿರ್ದೇಶಕರು (ಅಥವಾ ಅವರಿಂದ ನಾಮನಿರ್ದೇಶಿತರು) ಕರ್ನಾಟಕ ವಿದ್ಯುತ್ ನಿಗಮ ಲಿ., ಬೆಂಗಳೂರು | ಸದಸ್ಯರು |
| 14. | ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿ | ಸದಸ್ಯ ಕಾರ್ಯದರ್ಶಿ |

ಸದರಿ ಕಾರ್ಯಕಾರಿ ಸಮಿತಿಯ ಅಧಿಕಾರ, ಕರ್ತವ್ಯ ಹಾಗೂ ಜವಾಬ್ದಾರಿಗಳು ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನಲ್ಲಿ ನಮೂದಿಸಿರುವಂತೆ ಇರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 927

**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59